ಸಿ. ವ್ಹಿ. ಮಠದ

# ಮುಂಡರಗಿ ಭೀಮರಾಯ

ದೇಶದ ಸ್ವಾತಂತ್ರ್ಯಕ್ಕಾಗಿ ಪರಕೀಯರ ಜೊತೆಗೆ ತನ್ನ ಜೀವನವನ್ನೇ ಪಣಕ್ಕಿಕ್ಕಿ ಹೋರಾಡಿದವರಲ್ಲಿ ಮುಂಡರಗಿ ಭೀಮರಾಯ ಅಗ್ರಗಣ್ಯ ವ್ಯಕ್ತಿ. ಸ್ವತಂತ್ರ ಮನೋವೃತ್ತಿಗೂ ಪ್ರಾಮಾಣಿಕತೆಗೂ ಪ್ರಸಿದ್ಧವಾಗಿದ್ದ ಮನೆತನಕ್ಕೆ ಸೇರಿದ ಶ್ರೀಸಾಮಾನ್ಯ ಮುಂಡರಗಿ ಭೀಮರಾಯ.

ಇದ್ದಕ್ಕಿದ್ದಂತೆ ಒಂದುದಿನ ಪಂತಪ್ರಧಾನ ಧೊಂಡೋಪಂತ ನಾನಾಪೇಶ್ವೆಯವರಿಂದ ದಕ್ಷಿಣದ ಎಲ್ಲ ಸರಂಜಾಮಿಗಳಿಗೆ, ಜಹಗೀರದಾರರುಗಳಿಗೆ, ದೇಶಮುಖರಿಗೆ, ದೇಶಪಾಂಡೆಗಳಿಗೆ ಹಾಗೂ ಉಳಿದ ಜಮೀನುದಾರರಿಗೆ, ಪಾಟೀಲರಿಗೆ, ಕುಲಕರ್ಣಿಯವರಿಗೆ ಹಾಗೂ ಸಮಸ್ತ ಜನತೆಗೆ ದೆಹಲಿಯ ಮಹಾರಾಜರ ಅಪ್ಪಣೆಯ ಮೇರೆಗೆ ಹೊರಡಿಸಲಾದ ಒಂದು ಮಹತ್ವಪೂರ್ಣ ಕಾಗದ ಕೈಸೇರಿತು. ಈ ಕಾಗದ ಭೀಮರಾಯರಿಗೂ ಸಿಕ್ಕಿತು. ಈ ಕಾಗದದಲ್ಲಿ ಮುಖ್ಯವಾಗಿ ಬ್ರಿಟಿಷರ ವಿರುದ್ಧ ಸಿಡಿದೆದ್ದು ಸ್ವಾತಂತ್ರ್ಯ ಕಹಳೆಯನ್ನು ಮೊಳಗಲು ಕೇಳಿಕೊಳ್ಳಲಾಗಿತ್ತು.

ಭೀಮರಾಯನು ಧೈರ್ಯಶೀಲನೂ ಸತತ ಪರಿಶ್ರಮಿಯೂ ಆಗಿದ್ದನು. ಭೀಮರಾಯನ ಅಜ್ಜನಾದ 'ಮೊಂಡಗಿ' ಭೀಮರಾಯನು ಡಂಬಳ ದೇಸಾಯಿಯ ಮುಖ್ಯಮಂತ್ರಿಯಾಗಿ ದಕ್ಷಿಣದಲ್ಲಿ ಪೇಶ್ವೆಯ ಮಂಡಲಾಧಿಪತಿಯನ್ನು ಧಿಕ್ಕರಿಸಿ ಖ್ಯಾತಿ ಹೊಂದಿದ್ದನು. ಅಜ್ಜನ ಗುಣಗಳನ್ನು ಹೊಂದಿದ ಭೀಮರಾಯ, ವನ್ಯಮೃಗ ಬೇಟೆಯಲ್ಲಿ ಪರಿಪೂರ್ಣತೆ ಪಡೆದವನಾಗಿದ್ದನು. ಇವನ ತಂದೆ ಪೇಶ್ವೆ ಆಡಳಿತದಲ್ಲಿ ನ್ಯಾಯಾಧೀಶನಾಗಿದ್ದನು. ತನ್ನ ಶಿಕ್ಷಣ ಹಾಗೂ ಬುದ್ಧಿಯ ಬಲದಿಂದ ಭೀಮರಾಯನು ತಹಸೀಲ್ದಾರ ಪದವಿಗೇರಿದನು. ಹರಪನಹಳ್ಳಿ ಹಾಗೂ ಬಳ್ಳಾರಿಗಳಲ್ಲಿ ತಹಸೀಲ್ದಾರನಾಗಿ ಕೆಲಕಾಲ ಕೆಲಸಮಾಡಿದನು. ಆದರೆ ಪರಿಸ್ಥಿತಿಯ ಅರಿವಿನಿಂದಾಗಿ ಬ್ರಿಟಿಷರ ಕೈಕೆಳಗೆ ಸೇವೆಮಾಡುವ ಇಚ್ಛೆ ಇಲ್ಲದವನಾದನು. ಬ್ರಿಟಿಷರ ದಬ್ಬಾಳಿಕೆಯಿಂದಾಗಿ ದೇಶ ಬಡವಾಗಹತ್ತಿದೆ ಎಂಬ ವಿಚಾರ ಭೀಮರಾಯನ ಮನಸ್ಸನ್ನು ಕೊರೆಯಹತ್ತಿತ್ತು. ೧೮೫೭ನೆಯ ಮೇ, ಜೂನ, ಜುಲೈ ತಿಂಗಳುಗಳಲ್ಲಿ ಉತ್ತರ ಭಾರತದಲ್ಲಿ ನಡೆದ ಘಟನೆಗಳು ಭೀಮರಾಯನನ್ನು ಕಾರ್ಯಪ್ರವೃತ್ತನನ್ನಾಗಿ ಮಾಡಿದವು. ಮದ್ದುಗುಂಡು, ಶಸ್ತ್ರಾಸ್ತ್ರಗಳ ಸಂಗ್ರಹಕ್ಕೆ ಸನ್ನದ್ಧನಾದನು.

ಭೀಮರಾಯನ ಚಲನವಲನಗಳ ಬಗ್ಗೆ ಸಂಶಯಗೊಂಡ ಧಾರವಾಡದ ಪೋಲೀಸ್ ಸೂಪರಿಂಟೆಂಡೆಂಟ್ ಥಾಮಸ್ ಅವರು ಮ್ಯಾಜಿಸ್ಟ್ರೇಟರಿಗೆ ೧೦ ಮೇ ೧೮೫೭ ಹಾಗೂ ಪುನಃ ಆಗಸ್ಟ್ ೧೮೫೭ರಲ್ಲಿ ಎರಡು ಪತ್ರಗಳನ್ನು ಬರೆದು, ಅವನ ವ್ಯಕ್ತಿತ್ವದ ಬಗ್ಗೆ ಸಂಶಯ ವ್ಯಕ್ತಪಡಿಸಿ, ಅವನೊಬ್ಬ ಅಪಾಯಕಾರಿ ವ್ಯಕ್ತಿ, ಬ್ರಿಟಿಷ್ ಸರಕಾರಕ್ಕೆ ಆತಂಕವನ್ನೊಡ್ಡಬಹುದೆಂಬ ವಿಚಾರಗಳನ್ನು ತಿಳಿಸಿದ್ದರು. ಧಾರವಾಡದ ಮ್ಯಾಜಿಸ್ಟ್ರೇಟರು ಭೀಮರಾಯನನ್ನು ಕರೆಯಿಸಿ ವಿಚಾರಿಸಲಾಗಿ, ಥಾಮಸ್ ಅವರ ಹೇಳಿಕೆಯಲ್ಲಿ ಸತ್ಯಾಂಶವಿಲ್ಲವೆಂದೂ ಆದರೆ ಅವನ ವಿರೋಧಿಗಳು ಹಬ್ಬಿಸಿದ ವದಂತಿಗಳೆಂದೂ ತಿಳಿಸಿ ಓಲೆ ಬರೆಯಲಾಯಿತು.

ಆದಾಗ್ಯೂ ಭೀಮರಾಯನಿಗೆ ಎಚ್ಚರಿಕೆ ನೀಡಿ, ಅವನ ಚಲನವಲನಗಳ ಮೇಲೆ ಕಣ್ಣಿಡಲಾಯಿತು.

ಹೈದರಾಬಾದಿನಲ್ಲಿ ಸ್ವಾತಂತ್ರ್ಯ ಸಂಗ್ರಾಮ ಕುರಿತ ಗ್ರಂಥದಲ್ಲಿ ಹೇಳಿದಂತೆ, ಸೋರಾಪುರ ದೇಸಾಯಿರು ಹಾಗೂ ಭೀಮರಾಯನೂ ಒಳ್ಳೆಯ ಗೆಳೆಯರಾಗಿದ್ದರು. ಅಲ್ಲದೆ ಹಮ್ಮಿಗೆ ಕೆಂಚನಗೌಡ, ಡಂಬಳ ದೇಸಾಯಿರೂ ಗೋವನಕೊಪ್ಪದ ಸರನಾಡಗೌಡರು, ಇವರೆಲ್ಲರ ಜೊತೆಗೆ ಸ್ನೇಹ ಸಂಪಾದಿಸಿದನು. ಮುಂಡರಗಿ ಭೀಮರಾಯ ಹಾಗೂ ನರಗುಂದದ ಬಾಬಾಸಾಹೇಬ ಇವರಿಬ್ಬರ ಪ್ರಭಾವದಿಂದಾಗಿ ಇಡೀ ಧಾರವಾಡ ಜಿಲ್ಲೆಯಲ್ಲಿ ಬ್ರಿಟಿಷರ ವಿರುದ್ಧ ಇವರದೊಂದು ಜಾಲವೇ ಪ್ರಾರಂಭವಾಯಿತು. ಕೆರೆ ಕಟ್ಟುವ ನೆಪದಲ್ಲಿ ಭೀಮರಾಯನು ೩೦೦ ರಿಂದ ೪೦೦ ಜನರನ್ನು ಕೂಡಿಸಿ, ಸೊರಟೂರ ದೇಸಾಯರ ಜೊತೆಗೂಡಿ ಬ್ರಿಟಿಷರ ವಿರುದ್ಧ ಬಂಡೇಳುವನೆಂಬ ಸುದ್ದಿ ಬಳ್ಳಾರಿ ಮ್ಯಾಜಿಸ್ಟ್ರೇಟರಿಂದ ಧಾರವಾಡ ಕಲೆಕ್ಟರನಿಗೆ ತಂತಿಯ ಮೂಲಕ ತಿಳಿಸಲಾಯಿತು. ತಕ್ಷಣ ಕಲೆಕ್ಟರ ಥಾಮಸ್ ಒಗಿಲ್ವ ಇವರಿಬ್ಬರನ್ನೂ ಕರೆ ಕಳುಹಿಸಿದನು. ಧೂರ್ತನಾದ ಭೀಮರಾಯನು ಸೊರಟೂರ ದೇಸಾಯಿಯ ಜೊತೆಗೂಡಿ ಕಲೆಕ್ಟರನನ್ನು ಕಾಣಲು ಬಂದನು. ತನ್ನ ಕಾರ್ಯಗಳ ಬಗ್ಗೆ ಬಂದ ಆರೋಪಗಳನ್ನು ಅಲ್ಲಗಳೆದನು ಹಾಗೂ ಅವುಗಳನ್ನು ಪುಷ್ಟೀಕರಿಸುವ ಯಾವುದೇ ಪುರಾವೆಗಳೂ ಇರಲಿಲ್ಲ. ಪುನಃ ತನ್ನ ಬಲವನ್ನು ಬೆಳಸಿಕೊಳ್ಳುವವರೆಗೆ ವಿಧೇಯತೆಯನ್ನು ವ್ಯಕ್ತಪಡಿಸಿದನು. ಮುಂದೆ ತನ್ನ ಚಟುವಟಿಕೆಗಳನ್ನು ಬಳ್ಳಾರಿ ಜಿಲ್ಲೆಗೆ ಬದಲಾಯಿಸಿದನು. ಇವರ ಚಟುವಟಿಕೆಗಳಿಂದಾಗಿ ಕಂದಾಯ ವಸೂಲಿ ಕೆಲಸಕ್ಕೆ ತಡೆಯುಂಟಾಯಿತು. ಹೂವಿನಹಡಗಲಿಯ ಪೋಲೀಸ್ ಅಧಿಕಾರಿಯ ಹೇಳಿಕೆಯಂತೆ, ಭೀಮರಾಯನು ಜಿಲ್ಲೆಯ ಶಾಂತತೆಯನ್ನು ಪಲ್ಲಟಿಸಲಿಕ್ಕಾಗಿ ಶಸ್ತ್ರಾಸ್ತ್ರಗಳ ಸಂಗ್ರಹ ನಡೆಸಿದನು. ೧೮೫೮ರ ಮೇ ಕೊನೆಯ ವಾರದಲ್ಲಿ ಕೆಲವು ಹಳ್ಳಿಗಳನ್ನು ದೋಚುವ ಮುಖಾಂತರ ತನ್ನ ಬ್ರಿಟಿಷ್ ವಿರೋಧಿ ಚಟುವಟಿಕೆಗಳನ್ನು ಪ್ರಾರಂಭಿಸಿದನು.

ಮೊದಲೇ ನಿಶ್ಚಯಿಸಿದಂತೆ, ಹಮ್ಮಿಗಿ ಕೆಂಚನಗೌಡನೂ ಸೊರಟೂರ ದೇಸಾಯರೂ ಭೀಮರಾಯನ ಜೊತೆಗೂಡಿ ದಂಗೆ ಏಳುವ ಸಂಗತಿ ಬ್ರಿಟಿಷರಿಗೆ ತಿಳಿದಿತ್ತು. ಇದರಿಂದಾಗಿ ಡಂಬಳ ಪೋಲೀಸನು ಹಮ್ಮಿಗೆಯಲ್ಲಿಯ ಕೆಂಚನಗೌಡರ ಮನೆಗೆ ತನ್ನ ಸಿಬ್ಬಂದಿಯೊಡನೆ ಮುತ್ತಿಗೆ ಹಾಕಿ ಅಲ್ಲಿದ್ದ ಮದ್ದುಗುಂಡು, ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡು, ಆ ಮನೆಗೆ ಬೀಗಮುದ್ರೆ ಹಾಕಿ, ಕಾವಲಿರಿಸಿ ಈ ಸಂಗತಿಯನ್ನು ಮೇಲಾಧಿಕಾರಿಗಳಿಗೆ ತಿಳಿಸಿದನು.

ಇದನ್ನು ತಿಳಿದ ಭೀಮರಾಯನು ಇನ್ನು ಸುಮ್ಮನೆ ಕುಳಿತರೆ ವೈರಿ ಮೇಲೆ ಬರುವುದೆಂದು ತಿಳಿದು, ಕೆಲವು ಜನರನ್ನು ಕೂಡಿಕೊಂಡು ಆ ಮನೆಗೆ ಆಯುಧ ಸಮೇತ ಮುತ್ತಿಗೆ ಹಾಕಿ ಕಾವಲುಗಾರನನ್ನು ಕೊಂದು ಹಾಕಿ, ಅಲ್ಲಿದ್ದ ಎಲ್ಲ ಸಾಮಗ್ರಿಗಳನ್ನು ವಶಪಡಿಸಿಕೊಂಡು, ಕೆಂಚನಗೌಡನ ಜೊತೆಗೂಡಿ ಮುಂದೆ ಸಾಗಿ ಡಂಬಳದಲ್ಲಿಯ ಖಜಾನೆಯನ್ನು ಮುತ್ತಿ ವಶಪಡಿಸಿಕೊಂಡನು. ಮುಂದೆ ಮತ್ತೆ ಕೆಲವು ಜನರು ಇವರನ್ನು ಕೂಡಿಕೊಂಡು ಗದುಗಿನ ಕಡೆಗೆ ನಡೆದರು. ಇವರನ್ನು ಕಂಡ ಅಂಚೆ–ತಂತಿ ಕಾರ್ಯಾಲಯದ ಸಿಬ್ಬಂದಿವರ್ಗ ಜೀವದಾಸೆಗೆ ಅಲ್ಲಿಂದ ಕಾಲ್ದೆಗೆದರು. ಅಲ್ಲಿದ್ದ ಎಲ್ಲ ಸೊತ್ತನ್ನು ದೋಚಿದರು. ಆದರೆ ಪೋಲೀಸರು ಇವರನ್ನು ಬೆನ್ನಟ್ಟಿದ್ದಾರೆಂಬ ಸುದ್ದಿ ತಿಳಿದು ಪೂರ್ವದಿಕ್ಕಿಗೆ ನಡೆದು ಕೊಪ್ಪಳ ತಲುಪಿದರು. ಈಗ ಇವರ ಬಂಡೆದ್ದರೆಂಬ ಸಂಗತಿ ಖಚಿತವಾದ ನಂತರ ಪೋಲೀಸರು ದೇಸಾಯಿಯ ಮನೆಗೆ ಬೆಂಕಿ ಇಟ್ಟು, ಭೀಮರಾಯನನ್ನು ಹಿಡಿಯಲು ಕೊಪ್ಪಳಕ್ಕೆ ಧಾವಿಸಿದರು.

ಕೊಪ್ಪಳದ ತಹಸೀಲ್ದಾರನು ರಾಯಚೂರ ದೋಚಿ ಡೆಪ್ಯುಟಿ ಕಮೀಷನರನಿಗೆ ಈ ರೀತಿ ತಿಳಿಸಿದನು : "ಭೀಮರಾಯ ೨೦೦–೩೦೦ ಜನರೊಡನೆ ಕೊಪ್ಪಳ ಕಿಲ್ಲೆಯನ್ನು ವಶಪಡಿಸಿಕೊಳ್ಳಲು ಹೊರಟಿದ್ದಾನೆ. ನಾನು ಭೀಮರಾಯನ ಇಬ್ಬರು ಹೆಂಡಿರು, ೧೨ ವರ್ಷದ ಒಬ್ಬ ಮಗ ಹಾಗೂ ಒಂದು ಚಿಕ್ಕ ಮಗು ಅಲ್ಲದೆ ಅವರ ಸೇವಕರನ್ನು ಸೆರೆಹಿಡಿದಿದ್ದೇನೆ."

ಇದನ್ನು ತಿಳಿದು ಭೀಮರಾಯನು ರೊಚ್ಚಿಗೆದ್ದು ತನ್ನ ಕುಟುಂಬದ ಬಿಡುಗಡೆಯನ್ನೇ ಆದ್ಯ ಕರ್ತವ್ಯವಾಗಿ ಇಟ್ಟುಕೊಂಡನು. ತನ್ನ ಅನುಯಾಯಿಗಳೊಂದಿಗೆ

ಕೆಂಚನಗೌಡನನ್ನು ಕೂಡಿಕೊಂಡು ಕೊಪ್ಪಳದ ಕಡೆಗೆ ನಡೆದನು. ಮುಂದೆ ಏನು ನಡೆಯಿತೆಂಬ ಬಗ್ಗೆ ಪೋಲೀಸ್ ಸೂಪರಿಂಟೆಂಡೆಂಟ್ ಥಾಮಸ್ ಅವರ ಮಾತಿನಲ್ಲಿ ಹೇಳಬೇಕಾದರೆ, "ದೇಸಾಯಿಯು ಭೀಮರಾಯನ ಊರಾದ ಬೆಣ್ಣೆಹಳ್ಳಿಗೆ ಹೋದನು. ನಂತರ ಭೀಮರಾಯನು ೭೦ ಜನ ಆಯುಧಧಾರಿಗಳೊಡನೆ ಹೆಮ್ಮಿಗೆಗೆ ಹೋಗಿ ಅಲ್ಲಿ ಫೌಜುದಾರನನ್ನು ತೊಂದರೆಗೊಳಪಡಿಸಿ, ದೇಸಾಯಿಯ ಮನೆಗೆ ಹೋಗಿ, ಅಲ್ಲಿ ಬೀಗಮುದ್ರೆಯನ್ನು ಮುರಿದು ಪೋಲೀಸರನ್ನು ಹೆದರಿಸಿ ಈ ಘಟನೆಗೆ ಕಾರಣನಾದ ಮನುಷ್ಯನನ್ನು ಕೊಂದು, ಮುಂದೆ ಸಿರಹಟ್ಟಿ ತಾಲ್ಲೂಕ ಪ್ರವೇಶಿಸಿ, ಅಲ್ಲಿ ಬಾಗೇವಾಡಿ, ಜರವಡ ಹಳ್ಳಿಗಳನ್ನು ಮುತ್ತಿ ಕೆಲೂರಲ್ಲಿ ಮಲಗಿಕೊಂಡನು. ಮರುದಿನ ಬೆಳಗ್ಗೆ ಡಂಬಳಕ್ಕೆ ಹೋಗಿ ಖಜಾನೆಯನ್ನು ಮುತ್ತಿದನು. ಆದರೆ ಮೊದಲೇ ಅಲ್ಲಿದ್ದ ಹಣವನ್ನೆಲ್ಲ ಬ್ರಿಟಿಷರು ಖಾಲಿ ಮಾಡಿದ್ದರಿಂದ ಅದನ್ನು ಮುತ್ತಿ ಇದ್ದ ಕೆಲವು ಆಯುಧಗಳನ್ನು ದೋಚಿಕೊಂಡು ಹೋದನು. ಇವರ ಕಾರ್ಯಕ್ರಮಗಳ ಬಗ್ಗೆ ಪೂರ್ಣ ಮಾಹಿತಿ ತಿಳಿದುಕೊಂಡು ಅವರ ಬೆನ್ನ ಹಿಂದೆಯೇ ಸಾಗಿದೆನು" ಎಂದು ಹೇಳುತ್ತಾನೆ.

ಭೀಮರಾಯನೇ ಈ ಹೋರಾಟದ ಧುರೀಣತ್ವ ವಹಿಸಿದ್ದರೂ ಅವನ ಹಿಂದೆ ಸೊರಟೂರ ದೇಸಾಯರ ಬೆಂಗಾವಲಿದ್ದಿತು. ಯಾಕೆಂದರೆ ಭೀಮರಾಯನು ಸೊರಟೂರ ದೇಸಾಯರ ಮುತಾಲಿಕನಾಗಿದ್ದನು. ಅವರ ಕಾರ್ಯಕ್ರಮದಂತೆ ನರಗುಂದ ಹಾಗೂ ರಾಮದುರ್ಗದ ಮುಖ್ಯಸ್ಥರು ಆ ಭಾಗವನ್ನು ಮುತ್ತುವುದು ಭೀಮರಾಯ ಹಾಗೂ ದೇಸಾಯರು ಈ ಭಾಗ ಹಾಗೂ ತುಂಗಭದ್ರೆಯ ಮದ್ರಾಸು ಭಾಗಗಳನ್ನು ಮುತ್ತಬೇಕೆಂದು ವಿಚಾರಿಸಿದ್ದರು.

ಕೊಪ್ಪಳದ ಕಡೆ ಹೊರಭಾಗ, ಭೂತನಹಳ್ಳಿಯ ಭರಮಪ್ಪನಾಯಕನು ಕೊಪ್ಪಳ ಕಿಲ್ಲೆಯನ್ನು ಯಾವುದೇ ಅಡೆತಡೆಯಿಲ್ಲದೇ ತೆಗೆದುಕೊಳ್ಳಬಹುದೆಂದು ತಿಳಿಸಿದನು. ಕೊಪ್ಪಳದ ತಹಸೀಲ್ದಾರನಾದ ಮಹಮ್ಮದ್ ಹಸೀಫನು ಅವರ ರಕ್ಷಣೆಯ ಎಲ್ಲ ವ್ಯವಸ್ಥೆ ಮಾಡಿ ಭೀಮರಾಯ ಹಾಗೂ ಕೆಂಚನಗೌಡರನ್ನು ಹುಡುಕಿಕೊಂಡು ನಡೆದನು. ಆದರೆ ಇತ್ತ ಭೀಮರಾಯ ಹಾಗೂ ಅವನ ಅನುಯಾಯಿಗಳು ಇವನು ಕೊಪ್ಪಳ ಬಿಟ್ಟ ಸಂಗತಿ ತಿಳಿದು, ಹಠಾತ್ತಾಗಿ ಕೊಪ್ಪಳವನ್ನು ಮೇ ೩೦ ರವಿವಾರ ಮುತ್ತಿದರು.

ಈಗ ಇದನ್ನು ತಿಳಿದ ಬ್ರಿಟಿಷರು ತೀವ್ರವಾಗಿ ಕಾರ್ಯಪ್ರವೃತ್ತರಾದರು. ಬಳ್ಳಾರಿ, ರಾಯಚೂರ, ಹೈದರಾಬಾದ್ ಹಾಗೂ ಧಾರವಾಡದಿಂದ ಹೊಸ ಸೈನಿಕ ತುಕಡಿಗಳು ಕೊಪ್ಪಳದತ್ತ ಧಾವಿಸಿದವು. ಮೇ ೩೧ಕ್ಕೆ ಇವೆಲ್ಲ ಕೊಪ್ಪಳ ತಲುಪಿದವು. ಭೀಮರಾಯನಿಗೆ ಮೊದಲು ಎಚ್ಚರಿಕೆ ಇತ್ತು, ನಂತರ ಯುದ್ಧ ಪ್ರಾರಂಭಿಸಿದರು. ಆದರೆ ನಮ್ಮ ಜನರಲ್ಲಿಯೇ ಕೆಲ ದೇಶದ್ರೋಹಿಗಳು ಕೋಟೆಬಾಗಿಲು ತೆಗೆದುಬಿಟ್ಟರು. ಭೀಮರಾಯ ಹಾಗೂ ಕೆಂಚನಗೌಡರು ಈ ಸಂಗತಿ ತಿಳಿದು ತಮಗೆ ಮೋಸವೆಸಗಿದ ದ್ವಾರಪಾಲಕರನ್ನು ತುಂಡರಿಸಿ ಬ್ರಿಟಿಷರೊಡನೆ ಯುದ್ಧ ಘೋಷಿಸಿದರು. ಕೆಲವು ತಾಸುಗಳವರೆಗೆ ಯುದ್ಧ ನಡೆಯಿತು. ಎರಡೂ ಕಡೆ ಎಷ್ಟೋ ಜನ ಮಡಿದರು. ಅಪಾರ ಹಾನಿಯುಂಟಾಯಿತು. ಆದರೆ ಕೋಟೆಯೊಳಗಿನ ಮದ್ದು ಗುಂಡುಗಳ ಸಂಗ್ರಹ ಮುಗಿಯುತ್ತಾ ಬಂದಿತು. ಅಂತೆಯೇ ಇವರು ತಮ್ಮ ನಿಲುವನ್ನು ಗಟ್ಟಿಯಾಗಿ ಸಲು ಅಸಹಾಯಕರಾದರು. ಈ ಸಮಯಕ್ಕೆ ಕೆಂಚನಗೌಡನು ಭೀಮರಾಯನ ಬಳಿ ಬಂದು ಈ ಸಮಯದಲ್ಲಿ ನಮಗುಳಿದಿರುವ ಒಂದೇ ಮಾರ್ಗವೆಂದರೆ ಪಲಾಯನ, ಇಲ್ಲವೆ ಶರಣಾಗತಿ ಎಂದನಂತೆ. ಇದನ್ನು ಕೇಳಿದ ಭೀಮರಾಯನ ಸಿಟ್ಟು ನೆತ್ತಿಗೇರಿತು. ತತ್‌ಕ್ಷಣ ಭೀಮರಾಯನು ಕೆಂಚನಗೌಡನನ್ನು ಗುಂಡಿಕ್ಕಿ ಕೊಂದು ತಾನೂ ಗುಂಡಿಟ್ಟುಕೊಂಡು ಸತ್ತನೆಂಬ ಸುದ್ದಿ ಆಗಿನ ಮೂಲಗಳಿಂದ ತಿಳಿದುಬರುತ್ತದೆ. ಯಾವ ರೀತಿ ಸೈನಿಕರು, ಸೈನ್ಯಾಧಿಕಾರಿ ಹಗ್ಸ್ ಅವರ ನೇತೃತ್ವದಲ್ಲಿ ಕಾರ್ಯಗನ್ನೆಸಗಿಹರೆಂಬುದು ಅವರ ಕಾಗದ ಪತ್ರಗಳಿಂದ ತಿಳಿಯುತ್ತದೆ.

ಭೀಮರಾಯನು ತನ್ನ ಸರ್ವಸ್ವವನ್ನೇ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಬಲಿ ಕೊಟ್ಟ ಮಹಾಧೀರ. ಒಂದು ವೇಳೆ ಸ್ವಜನ ದ್ರೋಹಿಗಳಿಂದ ವಂಚಿತನಾಗದೇ ಇದ್ದಿದ್ದರೆ, ಇಲ್ಲವೆ ರಣರಂಗದಲ್ಲಿ ಹೋರಾಡಿದ್ದರೆ ಅವನ ಶೌರ್ಯದ ಹಾಗೂ ಪರಿಶ್ರಮದ ಕಥೆ ಇನ್ನೂ ನಿಚ್ಚಳವಾಗಿ ತಿಳಿಯಬಹುದಾಗಿತ್ತು.